# ಕರ್ನಾಟಕ ವಿಧಾನಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 348
ಸದಸ್ಯರ ಹೆಸರು : ಶ್ರೀ ಎನ್.ಎಸ್.ಬೋಸ್ ರಾಜು
(ವಿಧಾನಸಭೆಯಿಂದ ಚುನಾಯಿತರಾದವರು)
ಉತ್ತರಿಸುವ ದಿನಾಂಕ : 18-07-2019.
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಯವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | 2018ನೇ ಸಾಲಿನಲ್ಲಿ ಪತ್ರಿಕಾ ಜಾಹೀರಾತು ನೀತಿ ಅಂತ್ಯಗೊಂಡಿರುವುದರಿಂದ ನೂತನ ಜಾಹೀರಾತು ನೀತಿ ಜಾರಿಗೆ ತರಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | • ಜಾಹೀರಾತು ನೀತಿ-2013ನ್ನು ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ/08/ವಾಪ್ರಜಾ/2010 ದಿ:25.10.2013 ರ ಮೂಲಕ ಜಾರಿಗೆ ತಂದಿದ್ದು, ತದನಂತರದಲ್ಲಿ ಈ ಜಾಹೀರಾತು ನೀತಿಗೆ ಅನುಷ್ಠಾನ ನಿಯಮಗಳು -2014ನ್ನು ರೂಪಿಸಿ ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ/69/ವಾಪ್ರಜಾ/2013, ದಿ:10.09.2014ರ ಮೂಲಕ ಜಾರಿಗೆ ತಂದಿರುತ್ತದೆ.<br>• ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ/69/ವಾಪ್ರಜಾ/2013, ದಿ:10.09.2014ರ ಆದೇಶದಲ್ಲಿ ಈ ಅನುಷ್ಠಾನ ನಿಯಮಗಳು ಸರ್ಕಾರವು ಅಧಿಸೂಚಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು ಹಾಗೂ ಜಾರಿಗೆ ಬಂದ ದಿನಾಂಕದಿಂದ ಮುಂದಿನ 5 ವರ್ಷದವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಚಾಲ್ತಿಯಲ್ಲಿರುತ್ತದೆ ಎಂದು ತಿಳಿಸಲಾಗಿರುವುದರಿಂದ, ಜಾಹೀರಾತು ಅನುಷ್ಠಾನ ನಿಯಮಗಳು-2014 ದಿ:10.09.2014 ರಿಂದ ಮುಂದಿನ 5 ವರ್ಷದವರೆಗೆ ಅಂದರೆ ದಿ:10.09.2019 ರವರೆಗೆ ಜಾರಿಯಲ್ಲಿರುತ್ತದೆ.<br>• ಈ ಹಿನ್ನಲೆಯಲ್ಲಿ ಜಾಹೀರಾತು ಅನುಷ್ಠಾನ ನಿಯಮಗಳನ್ನು ಪರಿಷ್ಕರಿಸುವ ಪ್ರಕ್ರಿಯೆ ಪರಿಶೀಲನಾ ಹಂತದಲ್ಲಿದ್ದು, ನಿಗದಿತ ಅವಧಿಯಲ್ಲಿ ಪರಿಷ್ಕರಣೆ ಮಾಡಲಾಗುವುದು. |
| (ಆ) | ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ಸ್ಥಳೀಯ ಪತ್ರಿಕೆಗಳನ್ನು ಪ್ರೋತ್ಸಾಹಿಸಲು ಹಾಗೂ 371 ಜೆ ಅನುಗುಣವಾಗಿ ಸೌಲಭ್ಯಗಳ ಬಗ್ಗೆ ಹಾಗೂ ಅಭಿವೃದ್ಧಿ ಅನುದಾನದ ಬಗ್ಗೆ ಮಾಹಿತಿ ನೀಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು? | • ಜಾಹೀರಾತು ಅನುಷ್ಠಾನ ನಿಯಮಗಳನ್ವಯ ಪತ್ರಿಕೆಗಳನ್ನು ಮಾಧ್ಯಮ ಪಟ್ಟಿಗೆ ಸೇರಿಸಲು ಪ್ರತಿ ಸಂಚಿಕೆ 2000 ಪ್ರಸಾರ ಹೊಂದಿ 2 ವರ್ಷಗಳ ಪ್ರಕಟಣಾ ಅವಧಿಯನ್ನು ಪೂರೈಸಿರಬೇಕು.<br>• ಸಂವಿಧಾನದ 371 ಜೆ ಕಲಂನಡಿ ಗುರುತಿಸಲಾಗಿರುವ ಜಿಲ್ಲೆಗಳಲ್ಲಿ ಪ್ರಕಟವಾಗುವ ಪತ್ರಿಕೆಗಳಿಗೆ ಶೇ.50 ರಷ್ಟು ವಿನಾಯತಿ ನೀಡಿದ್ದು, ಪತ್ರಿಕೆಗಳು ಪ್ರತಿ ಸಂಚಿಕೆ ಕನಿಷ್ಠ 1000 ಪ್ರತಿಗಳ ಪ್ರಸಾರ ಹಾಗೂ 1 ವರ್ಷದ ಪ್ರಕಟಣಾ ಅವಧಿ ಪೂರೈಸಿರಬೇಕು.<br>• ಸಂವಿಧಾನದ 371 ಜೆ ಕಲಂನಡಿ ಗುರುತಿಸಲಾಗಿರುವ ಜಿಲ್ಲೆಗಳಲ್ಲಿ ಪ್ರಕಟವಾಗುವ ಪತ್ರಿಕೆಗಳಿಗೆ ಯಾವುದೇ ವಿಶೇಷ ಅನುದಾನ ನೀಡುವಂತಹ ಯೋಜನೆ ಇರುವುದಿಲ್ಲ. |

KCI-PIP/21/2019-INFO-KC-SEC

(ಹೆಚ್.ಡಿ.ಕುಮಾರಸ್ವಾಮಿ)
(ಮುಖ್ಯಮಂತ್ರಿ)